# ಅರೆಬಾಸೆ ಪುಣ್ಯಕೋಟಿ



ಯೋಗೀಶ ಹೊಸೊಳಿಕೆ

# ಅರೆಬಾಸೆ ಪುಣ್ಯಕೋಟಿ

ಅನುವಾದ :

ಯೋಗೀಶ ಹೊಸೊಳಿಕೆ

**ಕಿರಣರಂಗ ಅಧ್ಯಯನ ಸಂಸ್ಥೆ**

**ಗುತ್ತಿಗಾರು – 574 218**

# ಅರೆಬಾಸೆ ಪುಣ್ಯಕೋಟಿ

ಯೋಗೀಶ ಹೊಸೊಳಿಕೆ

**ಕಿರಣರಂಗ ಅಧ್ಯಯನ ಸಂಸ್ಥೆ**

**ಗುತ್ತಿಗಾರು – 574 218**

**ದಕ್ಷಿಣ ಕನ್ನಡ, ಕರ್ನಾಟಕ**

9449576632

ಬೆಳ್ಕ್‌ಗೆ : 28–04–2019

ಹಕ್ಕ್‌ಗ : ಬರ್‌ದವರ್‌ದ್ದ್

ಪುಟಗ : 16

ಕ್ರಯ : ₹ 20–00

ವಿನ್ಯಾಸ : ಜಯಲಕ್ಷ್ಮಿ ಎಸ್. ಜೋಯಿಸ್, ಪುತ್ತೂರು

ಚಿತ್ರಗ : ಪ್ರಸಾದ್ ಕುಳ್ಳಂಪಾಡಿ

ಮುದ್ರಣ : ನವೀನ್, 9449488092


ಹೊಸೊಳಿಕೆ ಸೀತಾರಾಮ ಗೌಡ

# ಅರ್ಪಣೆ

ನನ್ನ
ಹುಟ್ಟಿಗೆ,
ಕನ್ಸ್‌ಗೆ,
ಕೆಲ್ಸಕ್ಕೆ,
ನಡವಳಿಕೆಗೆ
ಕಾರಣ ಆದ ನನ್ನಪ್ಪಂಗೆ.

– ಯೋಗೀಶ ಹೊಸೊಳಿಕೆ

# ಸುರೂನ ಮಾತ್

ಪುಣ್ಯಕೋಟಿ ಪೊದ್ಯ ಬರ್ದ್ ಕವಿ ಯಾರುಂತ ಗೊತ್ತಿಲ್ಲದೆ ಇದ್ದರೂ ಇಂದ್ ಜನಪದ ಹಾಡಾಗಿ ಜನ ಮೆಚ್ಚಿಯೊಳ. ಪಂಡ್‌ನ ಕತೆಯಾದರೂ ಅಂದ್-ಇಂದ್-ಮುಂದೆನೂ ಎಲ್ಲ ವರ್ಗದ ಜನಗ ಮೆಚ್ಚುವ ಸುಲಭದ ನೀತಿಕತೆಯಾಗಿ ಗೆದ್ದುಟ್ಟು.

ಅರೆಬಾಸೆಲ್ಲಿ ಇಂತಹ ಒಂದು ರೂಪಕ ಬರ್ದ್ ಕೊಡಿತ ಬೇರೆ ಬೇರೆ ನಿರ್ದೇಶಕರ್‌ಗ ನನೊಟ್ಟಿಗೆ ಕೆಳ್ದ ಮತ್ತೆ ನಾನೇ ಬೇರೆ ಬೇರೆ ಮಕ್ಕಳ ತಂಡಗಳ ಬೇಟಿ ಕೊಡುವ ಹೊತ್ತ್‌ಲ್ಲಿ ಅರೆಬಾಸೆ ರೂಪಕ ಮಾಡಕಾಯಿತ್ತ್‌ತಾ ಅನ್ನಿಸಿದುಟ್ಟು. ಹೀಂಗೆ ಯೋಚಿಸ್‌ಕನ ನನ್ನ ನೆನ್ಪ್‌ಗೆ ಬಂದದ್ದು ಪುಣ್ಯಕೋಟಿ ಕತೆ. ಇದರ ಮೂಲಕತೆಗೆ ತೊಂದರೆಯಾಗದಂಗೆ ಚೌಕಿ ಮೇಲೆ ರಂಜಿಸುವಂಗೆ ಅರೆಬಾಸೆಲಿ ಪೊದ್ಯ ರಚನೆ ಮಾಡಿಯೊಳೆ.

ಇದ್ ಅರೆಬಾಸೆ ಇತಿಹಾಸಲ್ಲಿ ಸುರುನ ನೃತ್ಯರೂಪಕಂತ ಕಂಡದೆ. ಯಾವುದೇ ತಂಡಗ ಚೌಕಿಮೇಲೆ ಜನರ ಮೆಚ್ಚಿಸುವಂಗೆ ಇರುವ ಪೊದ್ಯ ಇದ್. ಈ ಕಾರಣಕ್ಕೆ ಅರೆಬಾಸೆ ಪುಣ್ಯಕೋಟಿನ ಅಚ್ಚ್ ಹಾಕುವ ಕೆಲ್ಸ ಮಾಡಿಯೊಳೆ.

ಈ ಪುಸ್ತಕ ತಯಾರಿಸುವ ಹೊತ್ತ್ ಆಸೀರ್ವದಿಸಿ ಒಳ್ಳ ಮಾಹಿತಿ ಕೊಟ್ಟ ಸ್ವಾಮೀ ಯೋಗೇಶ್ವರಾನಂದ ಸರಸ್ವತಿಯವರ ನೆನ್ನಿಕಣೆ. ಎರಡ್ ಮಾತ್ ಬರ್ದ್‌ಕೊಟ್ಟ ಎ. ಕೆ. ಹಿಮಕರ ಅವರ, ಅಕ್ಷರ್ ತಪ್ಪ್ ತಿಳಿಮಾಡ್ದ ರುಂದ್ರಚಾಮುಂಡಿ ಕುಶಾಲಪ್ಪ ಮಾಸ್ಟರ, ಚಿತ್ರಗಳ ಬುಡ್ಸಿಕೊಟ್ಟ ಪ್ರಸಾದ್ ಕುಳ್ಳಂಪಾಡಿ ಅವರ, ಬೇರೆ ಬೇರೆ ಕಡೆ ನನ್ನ ಪೊದ್ಯಗಳ ಹಾಡ್ದ ದಿನೇಶ ಹೊಸೊಳಿಕೆಯವರ ನೆನ್ನಿಕಣೆ.

ಇದೀಗ ಅರೆಬಾಸೆ ಪುಣ್ಯಕೋಟಿ ಪೊದ್ಯ ಪುಸ್ತಕ ನಿಮ್ಮ ಎದುರು ಉಟ್ಟು. ನೀವ್ಗೆಲ್ಲವ್ಕೂ ಇಷ್ಟ ಆದೆತ ನಂಬಿನೆ.

**– ಯೋಗೀಶ ಹೊಸೊಳಿಕೆ**

# ಅರೆಬಾಸೆ ಪುಣ್ಯಕೋಟಿ



ಜಗದ ಬಾರತ ದೇಶದೊಳಗೆ ಇರುವ ಗೊಲ್ಲ ಗೋಪಾಲ ಗೌಡನ
ಮೆರೆವ ಕನ್ನಡ ಊರಿನೊಳಗೆ ಕತೆನ ಕೇಳಿ ನಾ ಹೇಳಿನೆ ॥ ೧ ॥



ಚಿಗುರು ಮಾಯಿನ ಮರದ ಅಡಿಲಿ
ಕೊಳಲು ಉರ್ಗುವ ಗೊಲ್ಲ ಗೌಡ
ಎಲ್ಲ ದನಗಳ ನೋಡೊಕೂಂತ
ಕುಸಿಲಿ ಕರ್ದದೆ ಹಕ್ಕಲೆ ॥ ೧ ॥

ಗಂಗೆ ನೀ ಬಾ ಗೌರಿ ನೀ ಬಾ
ತುಂಗಬದ್ರೆ ಗೋಪಿ ನೀ ಬಾ
ಪುಣ್ಯಕೋಟಿ ನೀನೂ ಬಾ ಬಾ
ಗೌಡ ಕರ್ದದೆ ಗಟ್ಟಿಲಿ ॥ ೨ ॥



ದೊಡ್ಡ ಕಾಡ್‌ನ ನಡುಲಿ ನಿತ್ತ
ಅಡ್ಡ ಗೆರೆನ ಪಟ್ಟೆ ಬಲಿಪ
ದೊಡ್ಡ ಸ್ವರಲಿ ಕಿರ್ಚ್‌ತಿತ್
ಪುಣ್ಯಕೋಟಿನ ತಿಂಬಕೆ ॥ ೫ ॥

ಗೌಡ ಕರೆವ ದನಿನ ಕೇಳಿ
ಎಲ್ಲ ದನಗ ಓಡಿ ಬಂದವೆ
ಚೆಲ್ಲಿ ಸೂಸಿ ಹಾಲ್ ಕರೆಕನ
ಚೊಂಬು ತುಂಬಿ ಚೆಲ್ಲಿದೆ ॥ ೬ ॥



ಉರ್ದ್ ಸಿಟ್ಟ್‌ಲಿ ಹುಲಿ ಹಾರ್ದ ಹೊತ್ತಿಗೆ
ನೆಲ ನಡ್‌ಗಿ ದರ್ಪಿಕಾಕನ
ಹುಲಿನ ಗರ್ಜನೆ ಕೇಳಿ ಹಸ್‌ಗ
ಎದ್ದ್ ಬಿದ್ದ್ ಓಡುವೆ ॥ ೬ ॥

ಪುಣ್ಯಕೋಟಿ ಹೆಸ್‌ರ್‌ನಾ ಹಸ್
ಹೆತ್ತ ಕರ್‌ನ ನೆನ್ಸಿಕಂಡ್
ಪೊರ್ಲುಲಿ ಹಾಲ್ ಕುಡ್ಸೊಕೂಂತ
ಹಟ್ಟಿದಾರಿಲಿ ಹೋತಿತ್ತ್ ॥ ೭ ॥



ಇಂದ್ ನಂಗೆ ತಿಂದೆ ತಿನೊಕು
ಬಂದ ಹಸ್‌ನ ತಿಂದ್ ತೇಗೊಕು
ಹಾರಿಬಂದ್ ಹುಲಿ ಅಡ್ಡಕಟ್ಟಿ
ದನನ ಹಕ್ಕಲೆ ಹೇಳಿತ್ ॥ ೮ ॥

ನಿನ್ನ ಹೊಟ್ಟೆನ ಹರ್‌ದ್ ಹಾಕಿನೆ
ನಿನ್ನ ರಕ್ತನ ಹೀರಿಬುಟ್ಟನೆ
ನಿನ್ನ ಮಾಸನ ತಿಂದ್ ಬದ್ಕಿನೆ
ಹೀಂಗೆ ಹುಲಿ ತಾ ಹೇಳಿತ್ ॥ ೯ ॥



ಒಂದ್ ಮಾತ್ ನೀ ಹುಲಿಯೆ ಕೇಳ್
ನನ್ನ ಕೂಸಿನ ನೋಡಿ ಬನ್ನೆ
ಒಂದು ಬಿಂದ್ ಹಾಲ್ ಕೊಟ್ಟ್
ಬಂದ್ ನಾ ಸೇರ್ವೆ ಕಂಡಿತಾ ॥ ೧೦ ॥

ಇಂದ್ ನಿನ್ನ ತಿನದೆ ಬುಟ್ಟರೆ
ನೆಕ್ಕಿ ತಿಂಬ ಆಸೆ ಬುಡೊಕು
ಮತ್ತೆ ಬಾವ ಮಾತ್ ಸುಳ್ಳು
ಹಾಂಗೆ ಹೇಳ್ತ್ ಗೋವುಗೆ ॥ ೧೧ ॥

ಸತ್ಯವೇ ನಮ್ಮ ಅಪ್ಪ ಆಯ್ಯೆ
ಸತ್ಯವೇ ನಮ್ಮ ಬಂದು ಬಳಗ
ಸತ್ಯ ಬುಟ್ಟು ಸುಳ್ಳು ಹೇಳ್ರೆ
ದೆವ್ವ ದೇವ್ರ್‌ಗ ಶಪಿಸುವೆ ॥ ೧೨ ॥

ಕೊಂದು ತಿಂಬಕೆ ಬಂದ ಹುಲಿಗೆ
ಪೊರ್ಲುನ ಮಾತ್ ಹೇಳಿ ಗೋವು
ತನ್ನ ಕಂದನ ನೋಡಿಕಾಗಿ
ಬಂದ್ ಹಟ್ಟಿಗೆ ಕೂಡಿತ್ ॥ ೧೩ ॥



ಬಂದು ಬಳಗನ ಕಡೆಗೂ ಕರ್ದ್
ಕಣ್ ನೀರ್ ಹಾಕಿಕಂಡ್
ನೊಂದ್ ಹೇಳ್ತ್ ತನ್ನ ಸಾವುನ
ಕರ್‌ನ ತಬ್ಬಿ ಹಿಡ್ಕಂಡ್ ॥ ೧೪ ॥

ಅಮ್ಮ ನೀನ್ ಸಾಯೊದೇಕೆ
ನನ್ನ ತಬ್ಬುಲಿ ಮಾಡುದೇಕೆ
ಇಲ್ಲಿಯೆ ನೀ ಇದ್ದ್ ಬುಡುಂತಾ
ಕರ್ ಹೇಳಿ ಮರ್ಟತ್ ॥ ೧೫ ॥





ಕೊಟ್ಟ ಮಾತಿಗೆ ತಪ್ಪಿಕಾಗದ್
ಕೆಟ್ಟ ಯೋಚನೆ ಮಾಡಿಕಾಗದ್
ಕೊಟ್ಟ ಮಾತಿದ್ ನಡ್ಸಿಕೊಡುವೆ
ನನ್ನ ಮಾತಿದ್ ಕಂಡಿತ ॥ ೧೬ ॥

ಯಾರ ಹಾಲ್‌ನ ಕುಡಿಯೊಕಮ್ಮ
ಯಾರ ಹಕ್ಕಲೆ ಮಲಗೊಕಮ್ಮ
ಯಾರ್ ನಂಗೆ ನಮ್ಮೊವಮ್ಮಾ
ಯಾರ್ ಯಾರಿಗೂ ಇರಿಕಿಲೆ ॥ ೧೭ ॥

ಅಕ್ಕನೋವೇ ಅಣ್ಣನೋವೇ
ನನ್ನ ಬಂದು ಬಳಗದೋವೇ
ನನ್ನ ಕೂಸು ನಿಮ್ಮೊದೂಂತಾ
ಸಾಕಿ ಬೆಳ್ಸಿ ಪೊರ್ಲುಲಿ ॥ ೧೮ ॥

ಮುಂದೆ ಬಂದರೆ ಹಾಯಬೇಡಿ
ಹಿಂದೆ ಬಂದರೆ ಮೆಟ್ಟ್‌ಬೋಡಿ
ಕೂಸು ನಿಮ್ಮೊದೂಂತ ನೋಡಿ
ದುಕ್ಕಲಿ ಗೋವು ಹೇಳಿತ್ ॥ ೧೯ ॥

ಇಂದೆ ನಮ್ಮ ಋಣನು ತೀರ್ತ್
ಇಂದೆ ನಮ್ಮ ಬೊದ್ಕು ಮುಕ್ತ್
ಹಿಂಗೆ ಹೇಳಿ ಬಂದು ಬಳಗನ
ಬುಟ್ಟ್ ಕಾಡಿಗೆ ಹೊರ್ಟೋತ್ ॥ ೨೦ ॥

ಗೋವು ಕೂಸ್‌ನ ಬುಟ್ಟ್ ಬಂದ್
ಮೇವು ನೀರ್ ಬುಟ್ಟ್ ಬಂದ್
ಸಾವು ಕಾಯೆವ ಹುಲಿನ ಕರ್ದ್
ಗೋವು ಹೇಳ್ತ್ ದೈರ್ಯಲಿ ॥ ೨೧ ॥

ತುಂಡು ಬೇಕಾ ಮಾಸ ಬೇಕಾ
ಎದೆನ ಬಿಸಿ ರಕ್ತ ಬೇಕಾ
ನೆತ್ರ್ ಕುಡ್ತ್ ಮಾಸ ತಿಂದ್
ಹುಲಿ ನೀ ಕುಸಿಯಾಗಿರ್ ॥ ೨೨ ॥

ಪುಣ್ಯಕೋಟಿನ ಮಾತ್ ಕೇಳಿ
ಕಣ್‌ನೀರ್ ಅರ್‌ಸಿಕಂಡ್
ಪುಣ್ಯವಂತರ ಕೊಂದು ತಿಂದರೆ
ಪುಣ್ಯಬಾಕಿಲೆ ನಾವ್‌ಗೆ ॥ ೨೩ ॥



ನನ್ನ ಒಡಹುಟ್ಟಕ್ಕ ನೀನ್
ನಿನ್ನ ತಿಂದ್ ನಾನೆಂತ ಪಡೆವೆ
ಮೋಸ ಮಾಡದ ದನನ ಬುಟ್ಟು
ಹಾರಿ ನೆಗ್ದ್ ಹುಲಿ ಸತ್ತತು ॥ ೨೪ ॥

ಸತ್ಯವೇ ನಮ್ಮ ಅಪ್ಪ ಅಮ್ಮ
ಸತ್ಯವೇ ನಮ್ಮ ಬಂದು ಬಳಗ
ಸತ್ಯ ಬುಟ್ಟು ಸುಳ್ಳು ಹೇಳಿರೆ
ದೈವ ದೇವ್ರುಗ ಶಪಿಸುವೆ ॥ ೨೫ ॥



ಸತ್ಯವೇ ಭಗವಂತ ತೇಳ್ವ ಪುಣ್ಯಕೋಟಿನ ಕತೆಯಿದು
ಸತ್ಯವೇ ಭಗವಂತ ತೇಳ್ವ ಪುಣ್ಯಕೋಟಿನ ಕತೆಯಿದು.

ತಿಂಗೊಳ್ ಬೆಳ್‌ಕ್‌ಲಿ ಅರೆಬಾಸೆ ಪದ್ಯ ಬರ್ದ್ ಅರೆಬಾಸೆ ಅಕಾಡೆಮಿನ ಪುಸ್ತಕ ಪ್ರೋತ್ಸಾಹ ಇನಾಮು ಪಡ್ದಂವ ಹೊಸೊಳಿಕೆ ಯೋಗೀಶ. ತಿಂಗಳ್ ಬೆಳ್‌ಕ್‌ಲಿ ಪದ್ಯ ಬರ್ದ್ ಈಗ ಅವ ಹುಣ್ಣಮೆಗೆ ಹಕ್ಕಲೆ ಬಂದುಟು. ಮೊದುವೆ.

ನೋಡ್ದ ಗೂಡೆಗೆ ತಾಳಿಕ್‌ಟ್ಟುವ ದಿನದಂದೇ ಒಂದು ಪುಸ್ತಕ ಬುಡ್ಗಡೆ ಮಾಡಿ ಸೇರ್ದ ನಾಲ್ಕ್ ಜನಂಗಳ ಕೈಗಿಸೊಕೂಂತ ಅವನ ನಿರ್ಧಾರ ಒಳ್ಳ ಮನ್ಸ್. ಒಟ್ಟಿಗೆ ಅರೆಬಾಸೆ ಕವಿಗೋಷ್ಠಿನೂ ಇದ್ದ್ ದಿನ ವಿಶೇಷ! ವಿಶೇಷದ ಮೊದ್ವೆ. ಮೊದ್ವೆಗೆ ಸಾಹಿತ್ಯದ ತೊಂಬರದ ಅಡ್ಗೆ.

ಕನ್ನಡದ ಪ್ರಸಿದ್ಧ ಕಥನ ಕಾವ್ಯ 'ಪುಣ್ಯಕೋಟಿನ' ಅರೆಬಾಸೆಗೆ ಸುರೂಲಿ ತರ್ಜಿಮೆ ಮಾಡ್ದ ಹೆಗ್ಗಳಿಕೆ ಯೋಗೀಶಂದ್. ನಾಟಕಲಿ ಡಿಗ್ರಿ ಮಾಡ್ದ ಯೋಗೀಶಂಗೆ ಅದರ ಮಹತ್ವ ಗೊತ್ತಿದ್ದ ಕಾರಣ ಇನ್ನ್ ನಮ್ಮ ಮಕ್ಕಳಿಗೆ ನೃತ್ಯರೂಪಕ ಮಾಡಿಕೆ ಅರೆಬಾಸೆಲೇ ಒಂದು ಸರ್ಕ್ ಸಿಕ್ಕಿದಾಂಗಾತ್.

ಮೊದ್ವೆಲಿನೂ ಸಾಹಿತ್ಯ ಉಟ್ಟು, ಸಾಹಿತ್ಯಲಿನೂ ಮೊದ್ವೆ ಉಟ್ಟು. ಯೋಗೀಶ ನಮ್ಮ ಹೈದ ಆದರೂ ಎಲ್ಲವರ ಹಾಂಗಲ್ಲ. ಸೃಜನಶೀಲ ಚಿಂತನೆ, ಯಾಗೋಳೂ ಹೊಸೊಸ ಆಲೋಚನೆ, ಕೆಲ್ಸ, ಕಾರ್ಯಗಂತೇಳುವ ತುಡ್ತ ಇರುವ ವ್ಯಕ್ತಿ.

ಪುಣ್ಯಕೋಟಿಂತೇಳಿರೆ ನಂಬಿಕೆಗೆ ಇಸ್ವಾಸಕ್ಕೆ ಇನ್ನೊಂದು ಹೆಸ್ರ್, ಬನ್ನೆಂತೇಳಿರೆ ಜುವ್ವ ಕೊಡಿಕಿದ್ದರೂ ಬಂದೇ ಬಂದುಟು ಆ ಹಸು. ಪ್ರೀತಿ, ಇಸ್ವಾಸ, ಕೊಟ್ಟ ಮಾತ್‌ಗೆ ತಪ್ಪದ ಹಸು ಅದ್. ಇಂತಹ ನೀತಿ ಇರುವ ಕತೆನ ಕೇಳ್ದ ಮೇಲೆ ನಮ್ಮ ಜನಸಮುದಾಯ ಒಳ್ಳದಾಂತೇಳುವ ವಿಶ್ವಾಸಲಿ, ಬರ್ದ ಯೋಗೀಶಂಗೆ ಅಭಿನಂದನೆ.

– ಎ. ಕೆ. ಹಿಮಕರ



**ಕಿರಣರಂಗ ಅಧ್ಯಯನ ಸಂಸ್ಥೆ**

**ಗುತ್ತಿಗಾರು – 574 218**